# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೩, ೨೦೧೫ (ಭಾದ್ರಪದ ೧೨, ಶಕ ವರ್ಷ ೧೯೩೭)<br>Bengaluru, Thursday, September 3, 2015 (Bhadrapada 12, Shaka Varsha 1937) | ಸಂಚಿಕೆ ೩೬<br>Issue 36 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : 2015–16 ನೇ ಸಾಲಿಗೆ ರಾಜ್ಯದಲ್ಲಿರುವ ಸರ್ಕಾರಿ & ಖಾಸಗಿ ವೈದ್ಯಕೀಯ/ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕ ಕೋರ್ಸುಗಳ ಸೀಟುಗಳ ಶುಲ್ಕವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ** :
1. ಎಜುಕೇಷನ್ ಆಕ್ಟ್–2006 ಕ್ಕೆ ತಿದ್ದುಪಡಿಗಳನ್ನು ತರುವ ಸಂಬಂಧ ಮಾನ್ಯ ಉನ್ನತ ಶಿಕ್ಷಣ ಸಚಿವರು & ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ದಿ: 02–05–2015 ರಂದು ನಡೆದ ಸಭೆಯ ತೀರ್ಮಾನಗಳು.
2. ಕರ್ನಾಟಕ ವೃತ್ತಿಪರ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ ಕುರಿತು ಸರ್ಕಾರ ಹಾಗೂ ಖಾಸಗಿ ಆಡಳಿತ ಮಂಡಳಿಗಳ ನಡುವೆ ಸಮ್ಮತಾಭಿಪ್ರಾಯ ಒಪ್ಪಂದ ಮಾಡಿಕೊಳ್ಳಲು ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ದಿ: 26–05–2015 ರಂದು ಜರುಗಿದ ಸಭೆಯ ತೀರ್ಮಾನಗಳು.

**ಪ್ರಸ್ತಾವನೆ:**

ಮೇಲೆ ಓದಲಾದಂತೆ (1)ರಿಂದ (2)ರ ಸಭೆಯ ನಿರ್ಣಯಗಳನ್ವಯ 2015–16ನೇ ಸಾಲಿನ ಸ್ನಾತಕ ವೈದ್ಯಕೀಯ & ದಂತ ವೈದ್ಯಕೀಯ ಕೋರ್ಸುಗಳ ಸೀಟು ಹಂಚಿಕೆ & ಶುಲ್ಕ ನಿಗದಿಗೆ ಸಂಬಂಧಿಸಿದಂತೆ ಪರಸ್ಪರ ಒಡಂಬಡಿಕೆ ಮಾಡಿಕೊಳ್ಳುವ ಸಲುವಾಗಿ ರಾಜ್ಯದ ಖಾಸಗಿ ಕಾಲೇಜುಗಳ ಸಂಘಗಳಾದ ಕಾಮೆಡ್–ಕೆ, ಕೆ.ಆರ್.ಎಲ್.ಎಂ.ಪಿ.ಸಿ.ಎ & ಎ.ಎಂ.ಪಿ.ಸಿ.ಕೆ ಸಂಘಗಳ ಅಧ್ಯಕ್ಷರು / ಪ್ರತಿನಿಧಿಗಳೊಂದಿಗೆ ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ದಿ: 26–05–2015 ರಂದು ನಡೆದ ಸಭೆಯಲ್ಲಿ 2015–16ನೇ ಸಾಲಿನ ವೈದ್ಯಕೀಯ & ದಂತ ವೈದ್ಯಕೀಯ ಸ್ನಾತಕ ಕೋರ್ಸುಗಳಿಗೆ ಈ ಕೆಳಗಿನಂತೆ ಶುಲ್ಕವನ್ನು ಪರಿಷ್ಕರಿಸಲು ತೀರ್ಮಾನಿಸಲಾಗಿರುತ್ತದೆ.

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕಾಮೆಡ್–ಕೆ) ವೈದ್ಯಕೀಯ (MBBS)/ ದಂತ ವೈದ್ಯಕೀಯ (BDS) ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

ರೂ. ಗಳಲ್ಲಿ

| ಸಂಖ್ಯೆ | ಕೋರ್ಸ್‌ಗಳ ವಿವರ | ಕಾಮೆಡ್–ಕೆ ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| ಅ) | ಎಂಬಿಬಿಎಸ್ | 3,57,500 | 4,25,000 | 38,500 | 55,000 |
| ಆ) | ಬಿಡಿಎಸ್ | 2,53,000 | 2,75,000 | 27,500 | 35,000 |

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕೆ.ಆರ್.ಎಲ್.ಎಂ.ಪಿ.ಸಿ.ಎ & ಎ.ಎಂ.ಪಿ.ಸಿ.ಕೆ) ವೈದ್ಯಕೀಯ (MBBS) / ದಂತ ವೈದ್ಯಕೀಯ (BDS) ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

| ಸಂಖ್ಯೆ | ಕೋರ್ಸ್‌ಗಳ ವಿವರ | KRLMPCA & AMPCK ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| ಅ) | ಎಂಬಿಬಿಎಸ್ | 3,57,500 | 4,25,000 | 38,500 | 55,000 |
| ಆ) | ಬಿಡಿಎಸ್ | 2,53,000 | 2,75,000 | 27,500 | 35,000 |

ಉಳಿದಂತೆ ಸರ್ಕಾರಿ ವೈದ್ಯಕೀಯ & ದಂತ ವೈದ್ಯಕೀಯ ಕಾಲೇಜುಗಳಿಗೆ 2015–16 ನೇ ಸಾಲಿನಲ್ಲಿ ಸ್ನಾತಕ ವೈದ್ಯಕೀಯ & ದಂತ ವೈದ್ಯಕೀಯ ಕೋರ್ಸುಗಳಿಗೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಪಾವತಿಸಬೇಕಾದ ಶುಲ್ಕವು ಈ ಕೆಳಗಿನಂತಿರುತ್ತದೆ.

ರೂ.ಗಳಲ್ಲಿ

| ಕ್ರ.ಸಂ. | ಕೋರ್ಸುಗಳ ವಿವರ | ನಿಗದಿಪಡಿಸಿರುವ ಶುಲ್ಕ |
|---|---|---|
| 1. | ಎಂಬಿಬಿಎಸ್ | 16,700 |
| 2. | ಬಿಡಿಎಸ್ | 14,400 |

ಮುಂದುವರಿದು, ಡೀಮ್ಡ್ ವಿಶ್ವವಿದ್ಯಾಲಯಗಳ ವ್ಯಾಪ್ತಿಗೆ ಒಳಪಡುವ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಕಾಲೇಜುಗಳಲ್ಲಿ ಸಿಇಟಿ ಮೂಲಕ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳು ನಿಗದಿಪಡಿಸುವ ಶುಲ್ಕವನ್ನು ಪಾವತಿಸಬೇಕಾಗಿದೆಯೆಂದು, ಆದರೆ, ಶುಲ್ಕ ಮರುಪಾವತಿಗೆ ಅರ್ಹರಾಗಿರುವ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಕಾಮೆಡ್–ಕೆ ಸಂಸ್ಥೆಯೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಪ್ರಕಾರ ನಿಗದಿಪಡಿಸಿರುವ ಶುಲ್ಕವನ್ನು ಮರುಪಾವತಿಸಲಾಗುವುದು ಹಾಗೂ ವ್ಯತ್ಯಾಸದ ಮೊತ್ತವನ್ನು ಅಭ್ಯರ್ಥಿಗಳೇ ಸ್ವಂತವಾಗಿ ಭರಿಸತಕ್ಕದ್ದೆಂದು ತೀರ್ಮಾನವಾಗಿರುತ್ತದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ/ದಂತ ವೈದ್ಯಕೀಯ ಸ್ನಾತಕ ಕೋರ್ಸುಗಳ ಸೀಟುಗಳ ಪ್ರವೇಶ ಶುಲ್ಕವನ್ನು ಮೇಲ್ಕಂಡಂತೆ 2015–16 ನೇ ಸಾಲಿಗೆ ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 111 ಆರ್‌ಜಿಯು 2015, ಬೆಂಗಳೂರು, ದಿನಾಂಕ: 30–05–2015**

ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ & ದಂತ ವೈದ್ಯಕೀಯ ಸ್ನಾತಕ ಕೋರ್ಸುಗಳ ಸೀಟುಗಳ ಪ್ರವೇಶ ಶುಲ್ಕವನ್ನು 2015–16ನೇ ಸಾಲಿಗೆ ಈ ಕೆಳಕಂಡಂತೆ ಪರಿಷ್ಕರಿಸಿ ಆದೇಶಿಸಲಾಗಿದೆ.

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕಾಮೆಡ್–ಕೆ) ವೈದ್ಯಕೀಯ (MBBS)/ ದಂತ ವೈದ್ಯಕೀಯ (BDS) ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

ರೂ. ಗಳಲ್ಲಿ

| ಸಂಖ್ಯೆ | ಕೋರ್ಸ್‌ಗಳ ವಿವರ | ಕಾಮೆಡ್–ಕೆ ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| ಅ) | ಎಂಬಿಬಿಎಸ್ | 3,57,500 | 4,25,000 | 38,500 | 55,000 |
| ಆ) | ಬಿಡಿಎಸ್ | 2,53,000 | 2,75,000 | 27,500 | 35,000 |

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕೆ.ಆರ್.ಎಲ್.ಎಂ.ಪಿ.ಸಿ.ಎ & ಎ. ಪಿ.ಎಂ.ಸಿ.ಕೆ) ವೈದ್ಯಕೀಯ (MBBS) / ದಂತ ವೈದ್ಯಕೀಯ (BDS) ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

| ಸಂಖ್ಯೆ | ಕೋರ್ಸ್‌ಗಳ ವಿವರ | KRLMPCA & AMPCK ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| ಅ) | ಎಂಬಿಬಿಎಸ್ | 3,57,500 | 4,25,000 | 38,500 | 55,000 |
| ಆ) | ಬಿಡಿಎಸ್ | 2,53,000 | 2,75,000 | 27,500 | 35,000 |

ಉಳಿದಂತೆ ಸರ್ಕಾರಿ ಸ್ವಾಯುತ್ತ ವೈದ್ಯಕೀಯ & ದಂತ ವೈದ್ಯಕೀಯ ಕಾಲೇಜುಗಳಿಗೆ 2015-16 ನೇ ಸಾಲಿನಲ್ಲಿ ಸ್ನಾತಕ ವೈದ್ಯಕೀಯ & ದಂತ ವೈದ್ಯಕೀಯ ಕೋರ್ಸುಗಳಿಗೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೆ ಶುಲ್ಕವು ಈ ಕೆಳಗಿನಂತೆ ಶುಲ್ಕ ನಿಗದಿಪಡಿಸಲಾಗಿದೆ.

**ರೂ.ಗಳಲ್ಲಿ**

| ಕ್ರ.ಸಂ. | ಕೋರ್ಸುಗಳ ವಿವರ | ನಿಗದಿಪಡಿಸಿರುವ ಶುಲ್ಕ |
|---|---|---|
| 1. | ಎಂಬಿಬಿಎಸ್ | 16,700 |
| 2. | ಬಿಡಿಎಸ್ | 14,400 |

ಮುಂದುವರಿದು, ಡೀಮ್ಡ್ ವಿಶ್ವವಿದ್ಯಾಲಯಗಳ ವ್ಯಾಪ್ತಿಗೆ ಒಳಪಡುವ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಮತ್ತು ಕಾಲೇಜುಗಳಲ್ಲಿ ಸಿಇಟಿ ಮೂಲಕ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳು ನಿಗದಿಪಡಿಸುವ ಶುಲ್ಕವನ್ನೇ ಪಾವತಿಸತಕ್ಕದ್ದು. ಆದರೆ, ಶುಲ್ಕ ಮರುಪಾವತಿಗೆ ಅರ್ಹರಾಗಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಕಾಮೆಡ್-ಕೆ ಸಂಸ್ಥೆಯೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಪ್ರಕಾರ ನಿಗದಿಪಡಿಸಿರುವ ಶುಲ್ಕವನ್ನು ಮರುಪಾವತಿಸಲಾಗುವುದು. ಆದರೆ, ವ್ಯತ್ಯಾಸದ ಮೊತ್ತವನ್ನು ಅಭ್ಯರ್ಥಿಗಳೇ ಸ್ವಯಂ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಕೆ.ನಾಗವೇಣಿ**
ಸರ್ಕಾರದ ಅಧೀನ ಕಾರ್ಯದರ್ಶಿ-2
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

**PR-378**
**SC- 100**

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಒಇ 38 ಪೊಸಿಲಿ 2015 ಬೆಂಗಳೂರು, ದಿನಾಂಕ: 03-06-2015.

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 183 ಪೊಸಇ 2009, ದಿನಾಂಕ: 16-01-2010 ರಲ್ಲಿನ 6ನೇ ಸಾಲಿನಲ್ಲಿ ನಮೂದಾದ 'ಕರ್ನಾಟಕ ನಾಗರೀಕ ಸೇವಾ (ಆರ್‌ಪಿಪಿಪಿ) ನಿಯಮಗಳ ನಿಯಮ (6) ರ ಪ್ರಕಾರ ಸಹಾಯಕ ಆಡಳಿತಾಧಿಕಾರಿ ವೃಂದದಲ್ಲಿ ಕಾಲ್ಪನಿಕವಾಗಿ (national) ನಿಗದಿಪಡಿಸಿ ಅದರಂತೆ ಇವರ ಪಿಂಚಣಿಯನ್ನು ಮರು ನಿಗದಿಪಡಿಸಲು ಸರ್ಕಾರವು ಆದೇಶಿಸಿದೆ' ಎಂಬುದರ ಬದಲಾಗಿ **'ಕೆಸಿಎಸ್‌ಆರ್ ನ ನಿಯಮ 60 ಹಾಗೂ ಕರ್ನಾಟಕ ನಾಗರೀಕ ಸೇವಾ (ಆರ್‌ಪಿಪಿಪಿ) ಅಧಿನಿಯಮ ಮತ್ತು ನಿಯಮಗಳ ಪ್ರಕಾರ ಸಹಾಯಕ ಆಡಳಿತಾಧಿಕಾರಿ ವೃಂದದಲ್ಲಿ ಕಾಲ್ಪನಿಕವಾಗಿ (national) ನಿಗದಿಪಡಿಸಿ ಅದರಂತೆ ಇವರ ಪಿಂಚಣಿಯನ್ನು ಮರು ನಿಗದಿಪಡಿಸಲು ಸರ್ಕಾರವು ಆದೇಶಿಸಿದೆ'** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಒಇ 13 ಪೊಸಿಲಿ 2013, ದಿನಾಂಕ: 17-06-2014 ಅನ್ನು ಈ ಮೂಲಕ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜೆ.ಡಿ. ಮಧುಚಂದ್ರ ತೇಜಸ್ವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಎ)

**PR-379**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 2014-15ನೇ ಸಾಲಿನ ಬೇಸಿಗೆ ಭತ್ತವನ್ನು ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ದಿನಾಂಕ: 30-6-2015ರ ವರೆಗೆ ಖರೀದಿಸಲು ಖರೀದಿ ಕೇಂದ್ರಗಳನ್ನು ತೆರೆಯುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ: 08-05-2015ರಂದು ನಡೆದ ಸಚಿವ ಸಂಪುಟದ ಉಪ ಸಮಿತಿಯ ನಡವಳಿಗಳು.
2. ಆಯುಕ್ತರು, ಆನಾಸ & ಗ್ರಾವ್ಯ ಇಲಾಖೆ ಇವರ ದಿನಾಂಕ: 19-05-2015ರ ಪತ್ರ.
3. ಆಯುಕ್ತರು, ಆನಾಸ & ಗ್ರಾವ್ಯ ಇಲಾಖೆ ಇವರ ದಿನಾಂಕ: 22-05-2015ರ ಪತ್ರ.
4. ಜಿಲ್ಲಾಧಿಕಾರಿ, ದಾವಣಗೆರೆ ಇವರ ದಿನಾಂಕ: 22-05-2015ರ ಪತ್ರ.
5. ಸಂಖ್ಯೆ ಆನಾಸ 75 ಆರ್‌ಪಿಆರ್ 2014 ದಿನಾಂಕ: 19-05-2015ರಂದು ಕೇಂದ್ರ ಸರ್ಕಾರಕ್ಕೆ ಬರೆದ ಪತ್ರ.
6. ಕೇಂದ್ರ ಸರ್ಕಾರದ ದಿನಾಂಕ: 22-05-2015ರ ಪತ್ರ.
7. 25-05-2015ರಂದು ನಡೆದ ಸಚಿವ ಸಂಪುಟದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

2015ನೇ ಮಾರ್ಚ್ / ಏಪ್ರಿಲ್ ತಿಂಗಳಿನಲ್ಲಿ ಸಂಭವಿಸಿದ ಅಕಾಲಿಕ ಮಳೆಯಿಂದಾಗಿ ಅಪಾರ ಪ್ರಮಾಣದ ಬೆಳೆ ನಾಶವಾಗಿದ್ದು, ಈ ಹಿನ್ನೆಲೆಯಲ್ಲಿ ರೈತರು ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಭತ್ತವನ್ನು ಖರೀದಿಸಲು ಸರ್ಕಾರವನ್ನು ಒತ್ತಾಯಿಸಿರುತ್ತಾರೆ. ಅದರಂತೆ, ದಿನಾಂಕ: 08-05-2015ರಂದು ನಡೆದ ಸಚಿವ ಸಂಪುಟದ ಉಪ ಸಮಿತಿಯು ರಾಯಚೂರು, ಕೊಪ್ಪಳ, ಬಳ್ಳಾರಿ ಹಾಗೂ ಶಿವಮೊಗ್ಗ ಜಿಲ್ಲೆಗಳಲ್ಲಿ ಭತ್ತ ಖರೀದಿಸಲು ಅನುಮೋದನೆಗಾಗಿ ಸಚಿವ ಸಂಪುಟದ ಮುಂದೆ ಮಂಡಿಸುವಂತೆ ನಿರ್ಣಯಿಸಿರುತ್ತದೆ. ಉಲ್ಲೇಖಿತ 2ರ ಪತ್ರದಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಅಕಾಲಿಕ ಮಳೆಯಿಂದ ಹಾನಿಗೀಡಾದ ರಾಜ್ಯದ 06 ಜಿಲ್ಲೆಗಳಲ್ಲಿ (ರಾಯಚೂರು,

ಕೊಪ್ಪಳ, ಬಳ್ಳಾರಿ, ಯಾದಗಿರಿ, ಕಲಬುರಗಿ ಹಾಗೂ ಶಿವಮೊಗ್ಗ) ಭತ್ತದ ಖರೀದಿ ಕೇಂದ್ರಗಳನ್ನು ತೆರೆಯುವಂತೆ ರಾಜ್ಯ ಸರ್ಕಾರದ ಅನುಮೋದನೆ ಕೋರಿರುತ್ತಾರೆ. ಮುಂದುವರೆದು ಉಲ್ಲೇಖಿತ 3ರ ಪತ್ರದಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ದಾವಣಗೆರೆ ಜಿಲ್ಲೆಯಲ್ಲಿ ಕನಿಷ್ಠ ಬೆಂಬಲ ಯೋಜನೆಯಡಿಯಲ್ಲಿ ಭತ್ತದ ಖರೀದಿ ಕೇಂದ್ರಗಳನ್ನು ತೆರೆದು ಭತ್ತದ ಖರೀದಿ ಪ್ರಕ್ರಿಯೆ ಪ್ರಾರಂಭಿಸಬೇಕೆಂದು ಸಹ ಕೋರಿದ್ದಾರೆ.

ಉಲ್ಲೇಖಿತ 04ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ದಾವಣಗೆರೆ ಇವರು ಮಾರುಕಟ್ಟೆಯಲ್ಲಿ ಭತ್ತದ ಬೆಲೆ ಕುಸಿದಿರುವುದರಿಂದ ಭತ್ತದ ಖರೀದಿ ಕೇಂದ್ರಗಳನ್ನು ದಾವಣಗೆರೆಯಲ್ಲಿ ತೆರೆಯುವಂತೆ ರೈತರು ಒತ್ತಾಯಿಸಿರುವುದಾಗಿ ವರದಿ ಮಾಡಿರುತ್ತಾರೆ. ಮುಂದುವರೆದು, 53,000 ಹೆಕ್ಟೇರ್‌ನಲ್ಲಿ ಭತ್ತವನ್ನು ಬೆಳೆಯಲಾಗಿದ್ದು, ಅದರಲ್ಲಿ 3.00 ಲಕ್ಷ ಮೆ.ಟನ್, ಭತ್ತದ ಇಳುವರಿಯನ್ನು ಅಂದಾಜಿಸಲಾಗಿದೆ ಎಂದು ಸಹ ಅವರು ವರದಿ ಮಾಡಿರುತ್ತಾರೆ.

ಅದರನ್ವಯ ಉಲ್ಲೇಖಿತ 05ರ ಸರ್ಕಾರಿ ಪತ್ರದಲ್ಲಿ ಅಕಾಲಿಕ ಮಳೆಯಿಂದ ಹಾನಿಗೀಡಾದ ರಾಯಚೂರು, ಕೊಪ್ಪಳ, ಬಳ್ಳಾರಿ, ಕಲುಬುರಗಿ, ಯಾದಗಿರಿ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಬೇಸಿಗೆ ಭತ್ತ ಖರೀದಿಸಲು ಅನುಮತಿ ನೀಡುವಂತೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು.

ಉಲ್ಲೇಖಿತ 06ರಲ್ಲಿ ಕೇಂದ್ರ ಸರ್ಕಾರವು ದಿನಾಂಕ: 22–05–2015ರ ಪತ್ರದಲ್ಲಿ ಅಕಾಲಿಕ ಮಳೆಯಿಂದ ಹಾನಿಗೀಡಾದ ರಾಯಚೂರು, ಕೊಪ್ಪಳ, ಬಳ್ಳಾರಿ, ಕಲುಬುರಗಿ, ಯಾದಗಿರಿ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಬೇಸಿಗೆ ಭತ್ತ ಖರೀದಿಸಲು ಕೆಲವು ಷರತ್ತು ಹಾಗೂ ಕಾಲಮಿತಿಯೊಂದಿಗೆ ಅನುಮತಿಸಿರುತ್ತದೆ.

ಉಲ್ಲೇಖ 07ರ ನಡವಳಿಗಳಲ್ಲಿ ದಾವಣಗೆರೆ ಜಿಲ್ಲೆಯಿಂದ ಸಂಗ್ರಹವಾಗುವ ಭತ್ತವನ್ನು ರಾಜ್ಯ ಸರ್ಕಾರವೇ ಖರೀದಿಸಿ ಇದಕ್ಕೆ ತಗಲುವ ಎಲ್ಲಾ ವೆಚ್ಚಗಳನ್ನು ರಾಜ್ಯ ಸರ್ಕಾರದಿಂದಲೇ ಭರಿಸಲಾಗುವುದೆಂದು ಸಚಿವ ಸಂಪುಟವು ನಿರ್ಣಯಿಸಿರುತ್ತದೆ. ರಾಜ್ಯದ 07 ಜಿಲ್ಲೆಗಳಾದ ರಾಯಚೂರು, ಕೊಪ್ಪಳ, ಬಳ್ಳಾರಿ, ಯಾದಗಿರಿ, ಕಲಬುರಗಿ, ದಾವಣಗೆರೆ ಹಾಗೂ ಶಿವಮೊಗ್ಗ ಜಿಲ್ಲೆಗಳಲ್ಲಿ ದಿನಾಂಕ: 30–06–2015ರ ವರೆಗೆ ಭತ್ತದ ಖರೀದಿ ಕೇಂದ್ರಗಳನ್ನು ತೆರೆದು ಭತ್ತವನ್ನು ಖರೀದಿಸಲು ಸಹ ಸಚಿವ ಸಂಪುಟವು ಅನುಮೋದನೆ ನೀಡಿರುತ್ತದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 75 ಆರ್‌ಪಿಆರ್ 2014, ಬೆಂಗಳೂರು, ದಿನಾಂಕ: 30–05–2015.**

ರೈತರ ಹಿತದೃಷ್ಟಿಯಿಂದ 2014–15ನೇ ಸಾಲಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರಾಯಚೂರು, ಕೊಪ್ಪಳ, ಬಳ್ಳಾರಿ, ಯಾದಗಿರಿ, ಕಲಬುರಗಿ ಹಾಗೂ ಶಿವಮೊಗ್ಗ ಜಿಲ್ಲೆಗಳ ರೈತರಿಂದ ಎಫ್.ಎ.ಕ್ಯೂ ಗುಣಮಟ್ಟದ ಭತ್ತವನ್ನು ಪ್ರತಿ ಕ್ವಿಂಟಾಲ್‌ಗೆ ರೂ. 1360/– ದರದಲ್ಲಿ ಖರೀದಿಸಲು ಹಾಗೂ ದಿನಾಂಕ: 30–06–2015ರವರೆಗೆ ಭತ್ತದ ಖರೀದಿ ಕೇಂದ್ರಗಳನ್ನು ತೆರೆಯಲು ಹಾಗೂ ಈ ಭತ್ತವನ್ನು Central Poolಗೆ ತೆಗೆದುಕೊಳ್ಳಲು ಆದೇಶಿಸಿದೆ.

ಮುಂದುವರೆದು, ರೈತರ ಹಿತದೃಷ್ಟಿಯಿಂದ 2014–15ನೇ ಸಾಲಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ದಾವಣಗೆರೆ ಜಿಲ್ಲೆಯ ರೈತರಿಂದ ಎಫ್.ಎ.ಕ್ಯೂ ಗುಣಮಟ್ಟದ ಭತ್ತವನ್ನು ಪ್ರತಿ ಕ್ವಿಂಟಾಲ್‌ಗೆ ರೂ. 1360/– ದರದಲ್ಲಿ ಖರೀದಿಸಲು ಹಾಗೂ ದಿನಾಂಕ: 30–06–2015ರವರೆಗೆ ಭತ್ತದ ಖರೀದಿ ಕೇಂದ್ರಗಳನ್ನು ತೆರೆಯಲು ಹಾಗೂ ಆದೇಶಿಸಿದೆ.

ಈ ಎಲ್ಲಾ ಖರೀದಿ ಪ್ರಕ್ರಿಯೆಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

ಸರ್ಕಾರಿ ಆದೇಶ ಸಂಖ್ಯೆ ಆನಾಸ 66 ಆರ್‌ಪಿಆರ್ 2014, ದಿನಾಂಕ: 16–12–2014ರಲ್ಲಿ 2014–15ನೇ ಸಾಲಿನಲ್ಲಿ ಹೊರಡಿಸಿರುವ ಮಾರ್ಗಸೂಚಿಗಳನ್ವಯ ಕ್ರಮವಹಿಸತಕ್ಕದ್ದು.

ಸಂಗ್ರಹವಾಗುವ ಬೇಸಿಗೆ ಭತ್ತದ ಗಿರಣಿ (milling) ಕಾರ್ಯವನ್ನು ದಿನಾಂಕ: 31–08–2015ರೊಳಗೆ ಪೂರ್ಣಗೊಳಿಸತಕ್ಕದ್ದು.

ಭತ್ತದ ಖರೀದಿ, ಗುಣಮಟ್ಟದ ಪರಿಶೀಲನೆ, ಸಾಗಣಿಕೆ, ಸಂಗ್ರಹಣೆ ಹಾಗೂ ಗಿರಣಿ (milling) ಪ್ರಕ್ರಿಯೆಗೆ ಸಂಬಂಧಿಸಿದಂತೆ ಆಯುಕ್ತರು, ಆನಾಸ & ಗ್ರಾವ್ಯ ಇಲಾಖೆ ಇವರು ಸಂಪೂರ್ಣ ಜವಾಬ್ದಾರರಾಗಿರುತ್ತಾರೆ ಹಾಗೂ ಈ ಎಲ್ಲಾ ಕಾರ್ಯಗಳ ಬಗ್ಗೆ ದೈನಂದಿನ ವರದಿಯನ್ನು ಭಾರತೀಯ ಆಹಾರ ನಿಗಮದ ಜಿಲ್ಲಾ ಹಾಗೂ ಪ್ರಾದೇಶಿಕ ಕಛೇರಿಗಳಿಗೆ ಹಾಗೂ ಸರ್ಕಾರಕ್ಕೆ ಕಳುಹಿಸತಕ್ಕದ್ದು.

ಜಿಲ್ಲಾಧಿಕಾರಿಗಳು ಜಿಲ್ಲಾ ಕಾರ್ಯಪಡೆ ಸಭೆಯನ್ನು (ಟಾಸ್ಕ್ ಪೋರ್ಸ್ ಸಮಿತಿ) ಕರೆದು ಸ್ಥಳೀಯ ಸಮಸ್ಯೆಗಳ ಸಾಧಕ–ಬಾಧಕಗಳ ಕುರಿತು ಮುಂಜಾಗ್ರತೆ ಕ್ರಮ ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎನ್.ಕೃಷ್ಣಮೂರ್ತಿ**

ಸರ್ಕಾರದ ಉಪ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ

**PR-380**

**SC-200**

## ಆರ್ಥಿಕ ಸಚಿವಾಲಯ

**ವಿಷಯ** : ಶ್ರೀ ಆರ್.ವೆಂಕಟೇಶ್ ಪದಕಿ, ಅಬಕಾರಿ ಉಪ ಆಯುಕ್ತರು, ಚಿಕ್ಕಮಗಳೂರು ಜಿಲ್ಲೆ ಇವರ ಮೇಲಿನ ಲೋಕಾಯುಕ್ತ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ** : ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಂ–32/ಮೊ.ನಂ. 7/2014 ಚಿಕ್ಕಮಗಳೂರು, ದಿನಾಂಕ: 09–03–2015.

**ಪ್ರಸ್ತಾವನೆ:**

ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾದ ದಿನಾಂಕ: 09-03-2015ರ ಪತ್ರದಲ್ಲಿ ಆರ್.ವೆಂಕಟೇಶ್ ಪದಕಿ, ಅಬಕಾರಿ ಉಪ ಆಯುಕ್ತರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಪ್ರಕರಣದ ವಿವರವನ್ನು ಪರಿಶೀಲಿಸಿದೆ. ಶ್ರೀ ಆರ್.ವೆಂಕಟೇಶ್ ಪದಕಿ, ಅಬಕಾರಿ ಉಪ ಆಯುಕ್ತರು, ಚಿಕ್ಕಮಗಳೂರು, ಇವರು ಮದ್ಯದ ಅಂಗಡಿಗಳ ಪರವಾನಗಿ ನವೀಕರಣ, ಇತ್ಯಾದಿ ಕಾರ್ಯಕ್ಕಾಗಿ ನಿಗದಿತ ಶುಲ್ಕವಲ್ಲದೆ ಹೆಚ್ಚುವರಿಯಾಗಿ ಲಂಚದ ಹಣವನ್ನು ಆಯಾ ತಾಲ್ಲೂಕಿನ ಮಧ್ಯವರ್ತಿಗಳಿಂದ ವಸೂಲು ಮಾಡುತ್ತಿರುವುದು ಲೋಕಾಯುಕ್ತ ಪೊಲೀಸರ ಗಮನಕ್ಕೆ ಬಂದಿದ್ದು, ಅಧಿಕಾರಿಯು ಈ ಲಂಚದ ಹಣವನ್ನು ಸಾಗಿಸುತ್ತಿದ್ದಾರೆಂಬ ಖಚಿತ ಮಾಹಿತಿ ಆಧಾರದ ಮೇಲೆ ದಿ: 04-09-2014ರಂದು ಚಿಕ್ಕಮಗಳೂರು ಲೋಕಾಯುಕ್ತ ಠಾಣೆಯಲ್ಲಿ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚ 13(2)ರಡಿ ಮೊ.ಸಂ. 7/2014ನ್ನು ದಾಖಲಿಸಿ, ಚಿಕ್ಕಮಗಳೂರು ತಾ: ಕಸಬಾ ಹೋ: ಮಾಗಡಿ ಗ್ರಾಮದ ಹತ್ತಿರ ರಸ್ತೆ ಬದಿ ಕಾಯುತ್ತಿರುವಾಗ ಮಧ್ಯಾಹ್ನ 03-10 ಘಂಟೆ ಸಮಯದಲ್ಲಿ ಆರೋಪಿ ತಮ್ಮ ಸ್ವಂತ ವಾಹನ ಸ್ಯಾಂಟ್ರೋ ಸಂ.ಕೆಎ-02-ಎಂಡಿ-339ರಲ್ಲಿ ಬಂದಾಗ ಆ ವಾಹನವನ್ನು ತಡೆದು ನಿಲ್ಲಿಸಲಾಗಿ, ಸದರಿ ವಾಹನದಲ್ಲಿ ರೂ.6,87,257/- ನಗದು ದೊರೆತಿದ್ದು, ಈ ನಗದಿಗೆ ಸೂಕ್ತ ಸಮಜಾಯಿಷಿ/ಉತ್ತರವನ್ನು ನೀಡದ ಕಾರಣ ನಗದು ಹಣ ಮತ್ತು ಕಾರನ್ನು ಲೋಕಾಯುಕ್ತ ಪೊಲೀಸರು ವಶಕ್ಕೆ ಪಡೆದು ತಪಾಸಣೆ ನಡೆಸಿ ಸದರಿಯನ್ನು ಬಂಧಿಸಿರುತ್ತಾರೆ.

ಆರೋಪಿಯು ತನ್ನ ಕಾರಿನ ಡಿಕ್ಕಿಯಲ್ಲಿ ನಂಬರ್ ಲಾಕ್ ಸೂಟ್‌ಕೇಸಿನಲ್ಲಿ ಬೇರೆ ಬೇರೆ ಕಾಗದದ ಕವರ್‌ಗಳಲ್ಲಿ ಒಟ್ಟು ರೂ. 6,85,257/- ಹಣವನ್ನು ಸಂಗ್ರಹಿಸಿಟ್ಟುಕೊಂಡಿದ್ದು, ಆ ಹಣದ ಬಗ್ಗೆ ಆರೋಪಿ ಆರ್.ವೆಂಕಟೇಶ್ ಪದಕಿ ರವರನ್ನು ಕೇಳಲಾಗಿ ಸದರಿಯವರು ತಮ್ಮ ಸ್ನೇಹಿತರಾದ ಶ್ರೀ ಮಲ್ಲಿಕಾರ್ಜುನ ರವರಿಂದ ಎರಡು ದಿನಗಳ ಹಿಂದೆ ಸಾಲ ಪಡೆದಿರುವುದಾಗಿಯೂ ಸುಮಾರು ರೂ. 6 ಲಕ್ಷದ 50 ಸಾವಿರ ಇರಬಹುದು ಎಂದು ತಿಳಿಸಿ, ಉಳಿದ ಹಣದ ಬಗ್ಗೆ ಸಮಂಜಸವಾದ ಉತ್ತರವನ್ನು ನೀಡಿರುವುದಿಲ್ಲ. ಹಣವನ್ನು ಬೇರೆ ಬೇರೆ ಕವರ್‌ನಲ್ಲಿ ಇಟ್ಟಿರುವ ಬಗ್ಗೆ ಕೇಳಿದಾಗ ಆರೋಪಿಯು ದೇವಸ್ಥಾನಕ್ಕೆ ಕೊಡುವುದಕ್ಕೆ ಇಟ್ಟುಕೊಂಡಿರುವುದಾಗಿ ಮತ್ತು ಹಣವನ್ನು ಎಲ್ಲಿಗೆ ತೆಗೆದುಕೊಂಡು ಹೋಗುತ್ತಿರುವುದಾಗಿ ಕೇಳಲಾಗಿ ಈ ಬಗ್ಗೆ ಉತ್ತರವನ್ನು ನೀಡಿರುವುದಿಲ್ಲ. ಯಾವ ಕಡೆಗೆ ಹೋಗುತ್ತಿದ್ದೀರಿ ಎಂದು ಕೇಳಲಾಗಿ ಚಿಕ್ಕಮಗಳೂರಿನಿಂದ ಬೇಲೂರು ಕಡೆ ಹೋಗುತ್ತಿರುವುದಾಗಿ ಅಸಮಂಜಸ ಉತ್ತರವನ್ನು ನೀಡಿರುತ್ತಾರೆ. ಆರೋಪಿಯು ಹಣವನ್ನು ಸಾಲ ಪಡೆದಿರುವ ಅಂಶದ ಬಗ್ಗೆ ಶ್ರೀ ಮಲ್ಲಿಕಾರ್ಜುನರವನ್ನು ವಿಚಾರಿಸಲಾಗಿದೆ. ದಿನಾಂಕ: 4-09-2014ರಂದು ನೀಡಿದ ಲಿಖಿತ ಹೇಳಿಕೆಯಲ್ಲಿ ಶ್ರೀ ಮಲ್ಲಿಕಾರ್ಜುನರವರು ಆರೋಪಿಯೊಂದಿಗೆ ಯಾವುದೇ ಹಣಕಾಸಿನ ವ್ಯವಹಾರ ಇಲ್ಲವೆಂದು ತಿಳಿಸಿರುತ್ತಾರೆ.

ವೆಂಕಟೇಶ್ ಪದಕಿಯವರು ಮದ್ಯದ ಅಂಗಡಿಗಳ ಪರವಾನಿಗೆ ನವೀಕರಣಕ್ಕಾಗಿ, ಪತ್ರದ ವ್ಯವಹಾರ ಒಪ್ಪಿಗೆ ಕಾರ್ಯಕ್ಕಾಗಿ ನಿಗದಿತ ಶುಲ್ಕವಲ್ಲದೆ ಹೆಚ್ಚುವರಿ ಲಂಚದ ಹಣ ನಿಗದಿಪಡಿಸಿದಂತೆ ಮದ್ಯದ ಅಂಗಡಿಗಳ ಮಾಲೀಕರುಗಳಿಂದ ಹೆಚ್ಚುವರಿ ಲಂಚದ ಹಣವನ್ನು ಸಂಗ್ರಹಿಸಿಕೊಂಡು ತೆಗೆದುಕೊಂಡು ಹೋಗುವಲ್ಲಿ ತಮ್ಮ ಅಧಿಕಾರ ಪ್ರಭಾವವನ್ನು ದುರುಪಯೋಗಪಡಿಸಿಕೊಂಡು ಅಪರಾಧವೆಸಗಿರುವುದು ಚಿಕ್ಕಮಗಳೂರು ಲೋಕಾಯುಕ್ತ ಇನ್ಸ್‌ಪೆಕ್ಟರ್‌ರವರು ಇಲ್ಲಿಯವರೆಗೆ ನಡೆಸಿದ ತನಿಖೆಯಿಂದ, ಪಂಚಸಾಕ್ಷಿದಾರರ ಹೇಳಿಕೆಯಿಂದ ದಾಖಲಾತಿಗಳ ಪರಿಶೀಲನೆಯಿಂದ ಸಾಬೀತಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ.

ಲೋಕಾಯುಕ್ತರ ಬಳಿ ಲಭ್ಯವಿರುವ ದಾಖಲೆಗಳು ಸಾಕ್ಷ್ಯಾಧಾರಗಳಿಂದ ಆರೋಪಿತ ವೆಂಕಟೇಶ್ ಪದಕಿ, ಅಬಕಾರಿ ಉಪ ಆಯುಕ್ತರು, ಇವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ 13(2)ರಡಿ ಎಸಗಿರುವ ಅಪರಾಧ ಸಾಬೀತಾಗಿರುವುದರಿಂದ ಅಭಿಯೋಜನೆ ಒಳಪಡಿಸಲು ಕಲಂ 19(1)(ಬಿ)ರನ್ವಯ ಮಂಜೂರಾತಿ ನೀಡುವಂತೆ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಅಂತಿಮ ತನಿಖಾ ವರದಿಯನ್ನು ಪರಿಶೀಲಿಸಲಾಗಿದೆ. ಆರೋಪಿಯು ದಿನಾಂಕ: 04-09-2014 ರಂದು ಮಧ್ಯಾಹ್ನ 03-10 ಗಂಟೆಗೆ ಸಮಯದಲ್ಲಿ ಸ್ಯಾಂಟ್ರೋ ಹುಂಡೈ ಕಾರಿನ ನಂ. ಕೆಎ-02-ಎಂಡಿ-3539ರಲ್ಲಿ ಚಿಕ್ಕಮಗಳೂರಿನಿಂದ ಬೇಲೂರು ಕಡೆಗೆ ಹೋಗುತ್ತಿದ್ದಾಗ, ಚಿಕ್ಕಮಗಳೂರು ತಾಲ್ಲೂಕು, ಕಸಬಾ ಹೋಬಳಿಯ, ಮಾಗಡಿ ಗ್ರಾಮದ ಹತ್ತಿರವಿರುವ ಕೆರೆಯ ಹತ್ತಿರ ಬಂದಾಗ ಪಂಚರು ಹಾಗೂ ಸಿಬ್ಬಂದಿಯವರೊಂದಿಗೆ ಸ್ಯಾಂಟ್ರೋ ಹುಂಡೈ ನಂ.ಕೆಎ-02-ಎಂಡಿ-3539 ಕಾರನ್ನು ನಿಲ್ಲಿಸಿ ಆರೋಪಿಯ ತಪಾಸಣೆ ಮಾಡಿರುತ್ತಾರೆ. ಆರೋಪಿಯು ತನ್ನ ಕಾರಿನ ಡಿಕ್ಕಿಯಲ್ಲಿ ನಂಬರ್ ಲಾಕ್ ಸೂಟ್‌ಕೇಸಿನಲ್ಲಿ ಬೇರೆ ಬೇರೆ ಕಾಗದದ ಕವರ್‌ಗಳಲ್ಲಿ ಒಟ್ಟು ರೂ. 6,85,257-00 ಹಣವನ್ನು ಸಂಗ್ರಹಿಸಿಟ್ಟುಕೊಂಡಿದ್ದು, ಆ ಹಣದ ಬಗ್ಗೆ ಆರೋಪಿ ಆರ್.ವೆಂಕಟೇಶ್ ಪದಕಿ ರವರನ್ನು ಕೇಳಲಾಗಿ ಸದರಿಯವರು ತಮ್ಮ ಸ್ನೇಹಿತರಾದ ಶ್ರೀ ಮಲ್ಲಿಕಾರ್ಜುನರವರಿಂದ ಎರಡು ದಿನಗಳ ಹಿಂದೆ ಸಾಲ ಪಡೆದಿರುವುದಾಗಿಯೂ ಸುಮಾರು ರೂ. 6 ಲಕ್ಷದ 50 ಸಾವಿರ ಇರಬಹುದು ಎಂದು ಉಳಿದ ಹಣದ ಬಗ್ಗೆ ಸಮಂಜಸವಾದ ಉತ್ತರವನ್ನು ನೀಡಿರುವುದಿಲ್ಲ. ಹಣವನ್ನು ಬೇರೆ ಬೇರೆ ಕವರ್‌ನಲ್ಲಿ ಇಟ್ಟಿರುವ ಬಗ್ಗೆ ಕೇಳಿದಾಗ ಆರೋಪಿಯು ದೇವಸ್ಥಾನಕ್ಕೆ ಕೊಡುವುದಕ್ಕೆ ಇಟ್ಟುಕೊಂಡಿರುವುದಾಗಿ ಮತ್ತು ಹಣವನ್ನು ಎಲ್ಲಿಗೆ ತೆಗೆದುಕೊಂಡು ಹೋಗುತ್ತಿರುವುದಾಗಿ ಕೇಳಲಾಗಿ ಈ ಬಗ್ಗೆ ಉತ್ತರವನ್ನು ನೀಡಿರುವುದಿಲ್ಲ. ಯಾವ ಕಡೆಗೆ ಹೋಗುತ್ತಿದ್ದೀರಿ ಎಂದು ಕೇಳಲಾಗಿ ಚಿಕ್ಕಮಗಳೂರಿನಿಂದ ಬೇಲೂರು ಕಡೆ ಹೋಗುತ್ತಿರುವುದಾಗಿ ಅಸಮಂಜಸ ಉತ್ತರವನ್ನು ನೀಡಿರುತ್ತಾರೆ. ಆರೋಪಿಯು ಹಣವನ್ನು ಸಾಲ ಪಡೆದಿರುವ ಅಂಶದ ಬಗ್ಗೆ ಶ್ರೀ ಮಲ್ಲಿಕಾರ್ಜುನರವರನ್ನು ವಿಚಾರಿಸಲಾಗಿದೆ. ದಿನಾಂಕ: 04-09-2014ರಂದು ನೀಡಿದ ಲಿಖಿತ ಹೇಳಿಕೆಯಲ್ಲಿ ಶ್ರೀ ಮಲ್ಲಿಕಾರ್ಜುನರವರು ಆರೋಪಿಯೊಂದಿಗೆ ಯಾವುದೇ ಹಣಕಾಸಿನ ವ್ಯವಹಾರ ಇಲ್ಲವೆಂದು ತಿಳಿಸಿರುತ್ತಾರೆ. ಈ ಅಂಶಗಳ ಹಿನ್ನೆಲೆಯಲ್ಲಿ ಆರೋಪಿಯು ಅಕ್ರಮವಾಗಿ ಹಣ ಹೊಂದಿದ್ದಾರೆಂಬ ಆರೋಪವು ಮೇಲ್ನೋಟಕ್ಕೆ ಕಂಡುಬಂದಿದೆ. ಸದರಿ ಅಕ್ರಮ ಹಣವು ಪ್ರಥಮ ವರ್ತಮಾನ ವರದಿಗೆ ಪೂರಕವಾಗಿ ಕಂಡು ಬಂದಿರುತ್ತದೆ.

ಪ್ರಥಮ ವರ್ತಮಾನ ವರದಿಯಲ್ಲಿನ ಆರೋಪಿ-1 ಆದ ವೆಂಕಟೇಶ್ ಪದಕಿಯವರು ಮದ್ಯದ ಅಂಗಡಿಗಳ ಪರವಾನಿಗೆ ನವೀಕರಣಕ್ಕಾಗಿ, ಪತ್ರದ ವ್ಯವಹಾರ ಒಪ್ಪಿಗೆ ಕಾರ್ಯಕ್ಕಾಗಿ ನಿಗದಿತ ಶುಲ್ಕವಲ್ಲದೆ ಹೆಚ್ಚುವರಿ ಲಂಚದ ಹಣ ನಿಗದಿಪಡಿಸಿದಂತೆ ಈ ತಿಂಗಳಲ್ಲಿ ಮದ್ಯದ ಅಂಗಡಿಗಳ ನವೀಕರಣ ಪರವಾನಗಿಯ ಬಾಬ್ತು ಮದ್ಯದ ಅಂಗಡಿಗಳ ಮಾಲೀಕರುಗಳಿಂದ ಹೆಚ್ಚುವರಿ ಲಂಚದ ಹಣವನ್ನು ಸಂಗ್ರಹಿಸಿಕೊಂಡು ತೆಗೆದುಕೊಂಡು ಹೋಗುವಲ್ಲಿ ತಮ್ಮ ಅಧಿಕಾರ ಪ್ರಭಾವವನ್ನು ದುರುಪಯೋಗಪಡಿಸಿಕೊಂಡು ಅಪರಾಧವೆಸಗಿರುವುದು ಚಿಕ್ಕಮಗಳೂರು ಲೋಕಾಯುಕ್ತ ಇನ್ಸ್‌ಪೆಕ್ಟರ್‌ರವರು ಇಲ್ಲಿಯವರೆಗೆ ನಡೆಸಿದ ತನಿಖೆಯಿಂದ, ಪಂಚಸಾಕ್ಷಿದಾರರ ಹೇಳಿಕೆಯಿಂದ ದಾಖಲಾತಿಗಳ ಪರಿಶೀಲನೆಯಿಂದ ಸಾಬೀತಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಪ್ರಥಮ

ವರ್ತಮಾನ ವರದಿಯಲ್ಲಿನ ಆರೋಪಿ–2 ನೇ ಆರೋಪಿಯಾದ ಮಂಜಣ್ಣ @ ಮಂಜೇಗೌಡ ಬಿನ್ ನರಸಿಂಹ, ಅಬಕಾರಿ ಗಾರ್ಡ್, ರವರು ಅಪರಾಧ ಎಸಗಿದ ವೇಳೆ ಆರೋಪಿ–1ರ ಜೊತೆ ಇರಲಿಲ್ಲ ಹಾಗೂ ತನಿಖಾಧಿಕಾರಿ ನಡೆಸಿದ ತನಿಖೆಯಿಂದ ಆರೋಪಿ–2 ಕೃತ್ಯದಲ್ಲಿ ಭಾಗಿಯಾಗದಿರುವುದರಿಂದ ಪ್ರಕರಣದಿಂದ ಕೈಬಿಡಲಾಗಿದೆಯೆಂದು ತನಿಖಾ ವರದಿಯಲ್ಲಿ ನಮೂದಿಸಿರುವ ಅಂಶವನ್ನು ಗಮನಿಸಲಾಗಿದೆ.

ಈ ಪ್ರಕರಣದಲ್ಲಿ ವಿವಾದಕ್ಕೆ ಹೊರತಾದ ಕೆಲವು ಅಂಶಗಳಿವೆ. ಇದು ತನ್ನ ಕರ್ತವ್ಯವನ್ನು ನಿರ್ವಹಿಸಲು ಅಕ್ರಮ ಸಂಭಾವನೆ ಪಡೆಯುವಾಗ ಸಿಕ್ಕಿಬಿದ್ದ ಪ್ರಕರಣ ಅಲ್ಲ. ಸೋಡಿಯಂ ಬೈಕಾರ್ಬೋನೇಟ್ ದ್ರಾವಣದಲ್ಲಿ ಬೆರಳು ಅದ್ದಿ ಅದು ಗುಲಾಬಿ ಬಣ್ಣಕ್ಕೆ ತಿರುಗಿದ ಪ್ರಕರಣ ಅಲ್ಲ. ಆಗ ಪಂಚರೊಡನೆ ಮಹಜರ್ ನಡೆದ ಪ್ರಕರಣ ಅಲ್ಲ. ಇದು ಕಛೇರಿಯಲ್ಲಿ ನಡೆದಿದ್ದಲ್ಲ. ಆದರೆ, ಆರ್.ವೆಂಕಟೇಶ್ ಪದಕಿ, ಅಬಕಾರಿ ಉಪ ಆಯುಕ್ತರು, ಚಿಕ್ಕಮಗಳೂರು ಅವರು ವೈನ್‌ಸ್ಟೋರ್ ಮಾಲೀಕರುಗಳಿಂದ ಅಕ್ರಮ ಸಂಭಾವನೆಯನ್ನು ಪಡೆದು ಅದನ್ನು ತನ್ನ ಕಾರಿನಲ್ಲಿ ಮೈಸೂರಿನ ತನ್ನ ಮನೆಗೆ ಸಾಗಿಸುತ್ತಿದ್ದಾರೆ ಎಂಬ ಖಚಿತ ಮಾಹಿತಿಯ ಮೇಲೆ ಲೋಕಾಯುಕ್ತ ಪೊಲೀಸರು ಕಾರನ್ನು ಚಿಕ್ಕಮಗಳೂರು ಜಿಲ್ಲೆ ಮಾಗಡಿ ಸಮೀಪ ರಸ್ತೆಯಲ್ಲಿ ಕಾದು ನಿಂತು ಕಾರನ್ನು ನಿಲ್ಲಿಸಿ ಕಾರಿನ ತಪಾಸಣೆ ನಡೆಸಿದಾಗ ರೂ.6,85,257/–ಗಳು ಕಾರಿನಲ್ಲಿ ದೊರೆತು ಅದು ಹೇಗೆ ಬಂತು ಎಂಬುದಕ್ಕೆ ಮನವರಿಕೆ ಮಾಡಿಕೊಡುವಂತಹಾ ಉತ್ತರ ನೀಡದೇ ಇರುವ ಕಾರಣ ಅವರು ಸದರಿ ಮೊತ್ತವನ್ನು ಅಕ್ರಮವಾಗಿ ಹೊಂದಿದ್ದಾರೆಂಬುದನ್ನು ಮನಗಂಡು ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚ 13(2)ರಡಿ ಎಸಗಿದ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಅನುಮತಿಸಲು ಸೂಕ್ತ ಪ್ರಕರಣವಾಗಿದೆಯೆಂದು ಸರ್ಕಾರ ಪರಿಗಣಿಸಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಇ 139 ಇಪಿಎಸ್ 2014, ಬೆಂಗಳೂರು, ದಿನಾಂಕ: 18–04–2015.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988ರ ಕಲಂ 19(1)(ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅದೇ ಕಾಯ್ದೆಯ ಕಲಂ 7, 13(1)(ಡಿ) ಸಹವಾಚ 13(2)ರಡಿ ಎಸಗಿನ ಶಿಕ್ಷಾರ್ಹ ಅಪರಾಧಕ್ಕಾಗಿ ಆರ್.ವೆಂಕಟೇಶ್ ಪದಕಿ, ಅಬಕಾರಿ ಉಪ ಆಯುಕ್ತರು, ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಮಂಜೂರಾತಿ ನೀಡಿ ಆದೇಶಿಸಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 19(1)ರನ್ವಯ ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮೊಹರಿನ ಅಡಿಯಲ್ಲಿ ದಿನಾಂಕ: 18–04–2015ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವೆಂಕಟೇಶ್.ಜಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಅಬಕಾರಿ)

PR-382

## ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಇಡಿ 205 ಎಲ್‌ಐಬಿ 2015 ಬೆಂಗಳೂರು, ದಿನಾಂಕ: 01–07–2015**

ಸಾರ್ವಜನಿಕ ಗ್ರಂಥಾಲಯ ಇಲಾಖೆಯ ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯನ್ನು ಪುನರ್ ರಚಿಸುವ ಕುರಿತ ಸರ್ಕಾರದ ಆದೇಶ ಸಂಖ್ಯೆ ಇಡಿ 411 ಎಲ್‌ಐಬಿ 2013(ಭಾ), ದಿನಾಂಕ: 08–05–2015ರ ಆದೇಶದ ಭಾಗದಲ್ಲಿನ ಪಟ್ಟಿಯ ಕ್ರಮ ಸಂಖ್ಯೆ:22ರಲ್ಲಿ ಶ್ರೀಮತಿ ಮಾನಸ, ಲೇಖಕರು, ಹೆಚ್.ಐ.ಜಿ–1261, 1ನೇ ತಿರುವು, ಶ್ರೀರಾಂಪುರ, 2ನೇ ಹಂತ, ಮೈಸೂರು ಇವರನ್ನು ಸದಸ್ಯರೆಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ತಾರ**
ಸರ್ಕಾರದ ಅಧೀನ ಕಾರ್ಯದರ್ಶಿ(ಸಾಮಾನ್ಯ)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ

PR-419
SC-100

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ವಿವಿಧ ವರ್ಗದ ಕೈಗಾರಿಕೆಗಳಿಗೆ ಕೈಗಾರಿಕಾ ಪ್ರದೇಶ / ಕೈಗಾರಿಕಾ ವಸಾಹತುಗಳಲ್ಲಿ ನಿವೇಶನ / ಶೆಡ್‌ಗಳ ಹಂಚಿಕೆಗೆ ಮೀಸಲಾತಿ ನೀಡುವ ಬಗ್ಗೆ.

**ಓದಲಾಗಿದೆ** :
1. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೈವಾಇ/ಕೈಅ/ಇ1/567/A.Sub/SC/ST/2015-16, ದಿ: 05–05–2015.
2. ಸರ್ಕಾರದ ಆದೇಶ ಸಂ: ಸಿಐ 58 ಎಸ್‌ಪಿಐ 2014, 01–10–2014.

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿಗಳ 2015–16ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 412ರಲ್ಲಿ "ಹೊಸ ಕೈಗಾರಿಕಾ ನೀತಿಯನ್ವಯ–ಕೆಐಎಡಿಬಿ ಕೈಗಾರಿಕಾ ಪ್ರದೇಶದಲ್ಲಿ ಎಂಎಸ್‌ಎಂಇ ಘಟಕಗಳಿಗೆ ಕನಿಷ್ಠ 20%, ಮಹಿಳಾ ಉದ್ಯಮಶೀಲರಿಗೆ ಶೇ. 5%, ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ಶೇ. 22.5% ಮತ್ತು ಅಲ್ಪಸಂಖ್ಯಾತ ಹಾಗೂ ಹಿಂದುಳಿದ ವರ್ಗದ (ವರ್ಗ–1 ಮತ್ತು 2ಎ) ರವರಿಗೆ ಶೇ.5%ರಷ್ಟು ಭೂಮಿಯನ್ನು ಮೀಸಲಿಡಲಾಗುವುದು" ಎಂದು ಘೋಷಿಸಲಾಗಿದೆ. ಅದರಂತೆ, ವಿವಿಧ ವರ್ಗದ ಕೈಗಾರಿಕೆಗಳಿಗೆ ಕೈಗಾರಿಕಾ ಪ್ರದೇಶ / ಕೈಗಾರಿಕಾ ವಸಾಹತುಗಳಲ್ಲಿ ನಿವೇಶನ/ಶೆಡ್‌ಗಳ ಹಂಚಿಕೆಗೆ ಮೀಸಲಾತಿ ನೀಡುವ ಕುರಿತು, ಓದಲಾದ ಕ್ರಮಾಂಕ (1) ರ ಪತ್ರದಲ್ಲಿ ಆಯುಕ್ತರು, ಕೈಗಾರಿಕಾಭಿವೃದ್ಧಿ, ಇವರು ಈ ಕೆಳಕಂಡಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಸೂಕ್ತ ಆದೇಶ ಹೊರಡಿಸಲು ಕೋರಿರುತ್ತಾರೆ.

| ಕ್ರ.ಸಂ. | ಉದ್ದಿಮೆದಾರರ ವರ್ಗ | ನಿವೇಶನ/ಶೆಡ್‌ಗಳ ಹಂಚಿಕೆಗೆ ಶೇಕಡವಾರು ಮೀಸಲಾತಿ |
|---|---|---|
| 1 | ಎಂಎಸ್‌ಎಂಇ ಉದ್ದಿಮೆಗಳಿಗೆ (ಕೆಐಎಡಿಬಿ ಕೈಗಾರಿಕಾ ಪ್ರದೇಶದಲ್ಲಿ) | 20 |
| 2 | ಮಹಿಳಾ ವರ್ಗದ ಉದ್ದಿಮೆದಾರರಿಗೆ (ಕೆಐಎಡಿಬಿ ಕೈಗಾರಿಕಾ ಪ್ರದೇಶ/ ಕೆಎಸ್‌ಎಸ್‌ಐಡಿಸಿ ವಸಾಹತುಗಳಲ್ಲಿ) | 05 |
| 3 | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಉದ್ದಿಮೆದಾರರಿಗೆ (ಕೆಐಎಡಿಬಿ ಕೈಗಾರಿಕಾ ಪ್ರದೇಶ/ಕೆಎಸ್‌ಎಸ್‌ಐಡಿಸಿ ವಸಾಹತುಗಳಲ್ಲಿ) | 22.5 |
| 4 | ಅಲ್ಪಸಂಖ್ಯಾತರು, ಹಿಂದುಳಿದ ವರ್ಗದ (ವರ್ಗ–1 ಮತ್ತು 2ಎ), ವಿಕಲಚೇತನರು ಹಾಗೂ ಮಾಜಿ ಸೈನಿಕ ಉದ್ದಿಮೆದಾರರಿಗೆ (ಕೆಐಎಡಿಬಿ ಕೈಗಾರಿಕಾ ಪ್ರದೇಶ/ಕೆಎಸ್‌ಎಸ್‌ಐಡಿಸಿ ವಸಾಹತುಗಳಲ್ಲಿ) | 05 |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಮುಂದಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 148 ಸಿಎಸ್‌ಸಿ 2015, ಬೆಂಗಳೂರು, ದಿನಾಂಕ: 27–06–2015.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ಹೊಸ ಕೈಗಾರಿಕಾ ನೀತಿ 2014–19ರಲ್ಲಿ ಘೋಷಿಸಿರುವಂತೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ) ವತಿಯಿಂದ ಅಭಿವೃದ್ಧಿಪಡಿಸಲಾಗುವ ಹೊಸ ಕೈಗಾರಿಕಾ ಪ್ರದೇಶದ ಒಟ್ಟು ಹಂಚಿಕೆ ಮಾಡುವ ವಿಸ್ತೀರ್ಣದಲ್ಲಿ ಶೇ. 20ರಷ್ಟು ಭಾಗವನ್ನು ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ವರ್ಗದ (ಎಂಎಸ್‌ಎಂಇ) ಉದ್ದಿಮೆಗಳಿಗೆ ಮೀಸಲಾತಿ ನೀಡತಕ್ಕದ್ದು.

ಮುಂದುವರೆದು, ಕೆಐಎಡಿಬಿ ಯಿಂದ ಎಂಎಸ್‌ಎಂಇ ಉದ್ದಿಮೆಗಳಿಗೆ ಹೊಸ ಕೈಗಾರಿಕಾ ಪ್ರದೇಶಗಳಲ್ಲಿ ಮೀಸಲಿಡಲಾಗುವ ಶೇಕಡ 20ರಷ್ಟು ಪ್ರದೇಶದಲ್ಲಿ ಈ ಕೆಳಗಿನಂತೆ ಒಳ ಮೀಸಲಾತಿಯನ್ನು ಅನುಸರಿಸತಕ್ಕದೆಂದು ಹಾಗೂ ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮದಿಂದ (ಕೆಎಸ್‌ಎಸ್‌ಐಡಿಸಿ) ಅಭಿವೃದ್ಧಿಪಡಿಸಲಾಗುವ ಹೊಸ ಕೈಗಾರಿಕಾ ವಸಾಹತುಗಳಲ್ಲಿ ಸ್ಥಾಪಿಸುವ ನಿವೇಶನ / ಶೆಡ್‌ಗಳ ಹಂಚಿಕೆಯಲ್ಲಿ ಈ ಕೆಳಕಂಡಂತೆ ಶೇಕಡವಾರು ಮೀಸಲಾತಿಯನ್ನು ಅನುಸರಿಸಿ ಹಂಚಿಕೆ ಮಾಡತಕ್ಕದೆಂದು ಆದೇಶಿಸಲಾಗಿದೆ.

| ಕ್ರ.ಸಂ. | ಉದ್ದಿಮೆದಾರರ ವರ್ಗ | ನಿವೇಶನ/ಶೆಡ್‌ಗಳ ಹಂಚಿಕೆಗೆ ಶೇಕಡವಾರು ಮೀಸಲಾತಿ |
|---|---|---|
| 1 | ಮಹಿಳಾ ವರ್ಗದ ಉದ್ದಿಮೆದಾರರಿಗೆ | 05 |
| 2 | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಉದ್ದಿಮೆದಾರರಿಗೆ | 22.5 |
| 3 | ಅಲ್ಪಸಂಖ್ಯಾತರು, ಹಿಂದುಳಿದ ವರ್ಗದ (ವರ್ಗ–1 ಮತ್ತು 2ಎ), ವಿಕಲಚೇತನರು ಹಾಗೂ ಮಾಜಿ ಸೈನಿಕ ಉದ್ದಿಮೆದಾರರಿಗೆ | 05 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಲ್.ಎಸ್. ಶ್ರೀಕಂಠಬಾಬು**

ಸರ್ಕಾರದ ಅಧೀನ ಕಾರ್ಯದರ್ಶಿ(ಸಪ್ರಕೈ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**PR-420**
**SC-50**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಕೆ.ಜಿ.ಸತ್ಯನಾರಾಯಣ, ಕ್ಷ–ಕಿರಣ ತಜ್ಞರು, ಜಿಲ್ಲಾಸ್ಪತ್ರೆ, ಚಿತ್ರದುರ್ಗ ಅವರಿಗೆ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆ.ಕು.ಕ ಸೇವೆಗಳು ಅವರ ಪತ್ರ ಸಂಖ್ಯೆ:ಜೆಆರ್‌ಒ(1)83/2013–14 ದಿನಾಂಕ: 08–04–2015 ಮತ್ತು 19–06–2015.

**ಪ್ರಸ್ತಾವನೆ:**

ಡಾ॥ ಕೆ.ಜಿ.ಸತ್ಯನಾರಾಯಣ, ಕ್ಷ–ಕಿರಣ ತಜ್ಞರು, ಜಿಲ್ಲಾಸ್ಪತ್ರೆ, ಚಿತ್ರದುರ್ಗ ಅವರು ಕೌಟುಂಬಿಕ ಮತ್ತು ಆರೋಗ್ಯ ಸಮಸ್ಯೆಯ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ: 31–05–2015 ರಿಂದ ಅನ್ವಯವಾಗುವಂತೆ ಸ್ವ ಇಚ್ಛಾ ನಿವೃತ್ತಿ ಹೊಂದಲು ಅನುಮತಿ ಕೋರಿ ಮನವಿ ಸಲ್ಲಿಸಿದ್ದಾರೆ. ಅವರು ಇಲಾಖೆಯಲ್ಲಿ 16 ವರ್ಷಗಳಿಗೂ ಮೀರಿ ಅರ್ಹತಾದಾಯಕ ಸೇವೆ ಸಲ್ಲಿಸಿರುತ್ತಾರೆ. ಸದರಿ ವೈದ್ಯಾಧಿಕಾರಿಯವರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಬರಬೇಕಾಗಿಲ್ಲ ಮತ್ತು ಬಂಧಪತ್ರದ ಅವಧಿಯಲ್ಲಿ ಇರುವುದಿಲ್ಲವೆಂದು ಹಾಗೂ ಇವರ ವಿರುದ್ಧ ಇಲಾಖಾ ವಿಚಾರಣೆಗಳು ಬಾಕಿ ಇರುವುದಿಲ್ಲವೆಂದು ತಿಳಿಸುತ್ತಾ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285 (1)(ಎ) ಪ್ರಕಾರ ದಿನಾಂಕ: 31–05–2015 ರಿಂದ ಅನ್ವಯಿಸಿ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 203 ಹೆಚ್ಎಸ್ಹೆಚ್ 2015 ಬೆಂಗಳೂರು ದಿನಾಂಕ: 27-06-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ|| ಕೆ.ಜಿ.ಸತ್ಯನಾರಾಯಣ, ಕ್ಷ-ಕಿರಣ ತಜ್ಞರು, ಜಿಲ್ಲಾಸ್ಪತ್ರೆ, ಚಿತ್ರದುರ್ಗ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285 (1)(ಎ) ಪ್ರಕಾರ ದಿನಾಂಕ: 30-06-2015 ರಿಂದ ಜಾರಿಗೆ ಬರುವಂತೆ ಸ್ವಇಚ್ಛಾ ನಿವೃತ್ತಿ ಹೊಂದಲು ಸರ್ಕಾರದ ಅನುಮತಿಯನ್ನು ನೀಡಿದೆ.

ಈ ಅನುಮತಿಯು ಸದರಿ ವೈದ್ಯಾಧಿಕಾರಿಗಳಿಂದ ಮನೆಕಟ್ಟುವ/ವಾಹನ ಖರೀದಿ ಮುಂಗಡ ಇತ್ಯಾದಿ ಯಾವುದೇ ಸರ್ಕಾರಕ್ಕೆ ಬಾಕಿ ಇದ್ದಲ್ಲಿ ಅವರ ನಿವೃತ್ತಿ ಉಪದಾನಗಳಿಂದ ಕಡಿತಗೊಳಿಸಲಾಗುವುದೆಂಬ ಷರತ್ತಿಗೊಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**PR-422**

## ಆರ್ಥಿಕ ಸಚಿವಾಲಯ

**ವಿಷಯ** : ಶ್ರೀ ಡಿ.ಆರ್. ರೇಣುಕಾನಂದ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಪ್ರಸ್ತುತ ಸೇವೆಯಿಂದ ವಜಾಗೊಂಡಿರುವ) ಇವರ ಅಮಾನತ್ತಿನ ಅವಧಿ ಮತ್ತು ಅನಧಿಕೃತ ಗೈರು ಹಾಜರಿಯ ಅವಧಿಯನ್ನು ಇತ್ಯರ್ಥಪಡಿಸುವ ಬಗ್ಗೆ.

**ಓದಲಾಗಿದೆ** :

1. ಸರ್ಕಾರದ ಆದೇಶ ಸಂಖ್ಯೆ: ಆಇ 03 ವಾತೆತ 2010, ದಿನಾಂಕ: 01-03-2010.
2. ಸರ್ಕಾರದ ಆದೇಶ ಸಂಖ್ಯೆ: ಆಇ 03 ವಾತೆತ 2010, ದಿನಾಂಕ: 05-08-2013.
3. ನೋಟೀಸು ಸಂಖ್ಯೆ: ಆಇ 09 ವಾತೆತ 2014, ದಿನಾಂಕ:28-08-2014.

**ಪ್ರಸ್ತಾವನೆ:**

ಶ್ರೀ ಡಿ.ಆರ್. ರೇಣುಕಾನಂದ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ವಸೂಲಿ-1 ಮತ್ತು ವಸೂಲಿ-2), ದಾವಣಗೆರೆ, ಇವರು ಕರ್ತವ್ಯ ನಿರ್ವಹಣೆ ಸಂಬಂಧ Test purchaseಗಾಗಿ ಒದಗಿಸಿದ್ದ ಅನುದಾನವನ್ನು ದುರುಪಯೋಗಪಡಿಸಿಕೊಂಡು ಆರ್ಥಿಕ ದುರ್ವ್ಯವಹಾರ ಎಸಗಿದ ಆರೋಪಕ್ಕಾಗಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆದು ಮೇಲೆ (2)ರಲ್ಲಿ ಓದಲಾದ ದಿನಾಂಕ: 05-08-2013ರ ಸರ್ಕಾರಿ ಆದೇಶದಲ್ಲಿ ಅವರನ್ನು ಸೇವೆಯಿಂದ ವಜಾಗೊಳಿಸಲಾಯಿತು. ಈ ವಿಚಾರಣೆ ಸಂಬಂಧ ಅವರು ಮೇಲೆ (1) ಮತ್ತು (3)ರಲ್ಲಿ ಓದಲಾದ ದಿನಾಂಕ: 01-03-2010 ರಿಂದ 5-08-2013ರ ಆದೇಶಗಳ ನಡುವೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದ ಮೇಲೆ ಕಳೆಯದ ಅವಧಿ ಎಂದು ಏಕೆ ಪರಿಗಣಿಸಬಾರದೆಂಬುದಕ್ಕೆ ವಿವರಣೆ ಕೇಳಿ ಮೇಲೆ (3)ರಲ್ಲಿ ಓದಲಾದ ದಿನಾಂಕ:28-08-2014ರ ನೋಟೀಸ್ ನೀಡಲಾಯಿತು. ಈ ನೋಟಿಸ್‌ಗೆ ಅಧಿಕಾರಿಯು ಯಾವುದೇ ಉತ್ತರ ನೀಡಿರುವುದಿಲ್ಲ. ಪ್ರಕರಣವನ್ನು ಪರಿಶೀಲಿಸಲಾಗಿ ಅಧಿಕಾರಿಯು ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡು ಅನಂತರ ಕರ್ತವ್ಯಕ್ಕೆ ಗೈರು ಹಾಜರಾಗಿದ್ದಾರೆ. ಈ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 09 ವಾತೆತ 2014, ಬೆಂಗಳೂರು, ದಿನಾಂಕ: 20-04-2015.**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಡಿ.ಆರ್. ರೇಣುಕಾನಂದ, ಹಿಂದಿನ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇಲಾಖಾ ವಿಚಾರಣೆ ಸಂಬಂಧ ದಿನಾಂಕ: 1-03-2010 ರಿಂದ 5-08-2013ರವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು 'ಕರ್ತವ್ಯದ ಮೇಲೆ ಕಳೆಯದ ಅವಧಿ (Period not spent on duty)' ಎಂದು ಈ ಮೂಲಕ ಪರಿಗಣಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ.ಅಳವಂಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾ.ತೆ.-2 & ಸಮನ್ವಯ)

**PR-423**

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59